

# ಬೂದು ಕುದುರೆ



## ರಷ್ಯನ್ ಜಾನಪದ ಕಥೆ

ಹೇಳಿದವರು:
ಎಂ. ಬುಲಾತೊವ್
ಚಿತ್ರಗಳು:
ಟಿ. ಮಾವ್ರಿನ

ಒಂದಾನೊಂದು ಕಾಲದಲ್ಲಿ ಒಬ್ಬ ಮುದುಕನಿದ್ದ. ಅವನಿಗೆ ಮೂರು ಮಕ್ಕಳು. ಕಿರಿಯವನನ್ನು ಪೆದ್ದ ಇವಾನ್ ಅಂತ ಕರೆಯುತ್ತಿದ್ದರು.

ಮುದುಕ ಹೊಲದಲ್ಲಿ ಹಾಕಿದ ಗೋಧಿ ಬೆಳೆ ಚೆನ್ನಾಗಿ ಬೆಳೆಯಿತು. ಆದರೆ ಯಾರೋ ರಾತ್ರಿ ಹೊತ್ತು ಅದನ್ನೆಲ್ಲ ತುಳಿದು ಹಾಳು ಮಾಡುತ್ತಿದ್ದರು.

ಮುದುಕ ಮಕ್ಕಳಿಗೆ ಹೇಳಿದ:

"ಮಕ್ಕಳೇ ! ಸರದಿ ಪ್ರಕಾರ ರಾತ್ರಿ ಹೊಲ ಕಾಯಿರಿ. ಕಳ್ಳನನ್ನು ಹಿಡಿಯಿರಿ."







## ಮೊದಲನೆಯ ರಾತ್ರಿ

ಹಿರಿಯ ಮಗ ಹೊಲ ಕಾಯಲು ಹೋದ. ಅವನಿಗೆ ನಿದ್ದೆಯೋ ನಿದ್ದೆ. ಹುಲ್ಲಿನ ಮೆದೆಯ ಮೇಲೆ ಮಲಗಿ ಬೆಳಗಿನವರೆಗೂ ಚೆನ್ನಾಗಿ ನಿದ್ದೆ ಹೊಡೆದ.

ಬೆಳಿಗ್ಗೆ ಮನೆಗೆ ಬಂದು ಹೇಳುತ್ತಾನೆ:

"ಇಡೀ ರಾತ್ರಿ ಒಂದು ಕ್ಷಣವೂ ಕಣ್ಣು ಮುಚ್ಚಲಿಲ್ಲ! ಮೈಯೆಲ್ಲ ಥಂಡಿಯಿಂದ ಕೊರೀತಾ ಇದೆ. ಆದರೆ ಕಳ್ಳ ಕಾಣಲೇ ಇಲ್ಲ!"





## ಎರಡನೆಯ ರಾತ್ರಿ

ಮಧ್ಯದ ಹುಡುಗ ಹೊಲಕ್ಕೆ ಹೋದ. ಅವನೂ ರಾತ್ರಿಯೆಲ್ಲ ಹುಲ್ಲಿನ ಮೆದೆಯ ಮೇಲೆ ಮಲಗಿದ.





## ಮೂರನೆಯ ರಾತ್ರಿ

ಪೆದ್ದ ಇವಾನನ ಸರದಿ ಬರುತ್ತೆ. ಅವನು ಒಂದು ಸೀರೊಟ್ಟಿಯನ್ನು ಜೇಬಿನಲ್ಲಿಟ್ಟುಕೊಂಡು ಒಂದು ಉದ್ದವಾದ ಹಗ್ಗ ತೆಗೆದುಕೊಂಡು ಹೊಲಕ್ಕೆ ಹೋದ. ಅಲ್ಲಿ ಒಂದು ಬಂಡೆಯ ಮೇಲೆ ಸೀರೊಟ್ಟಿ ತಿನ್ನುತ್ತ ಕಳ್ಳನಿಗಾಗಿ ಕಾಯುತ್ತ, ನಿದ್ದೆ ಮಾಡದೆ, ಕುಳಿತ.

ಮಧ್ಯರಾತ್ರಿ ಹೊತ್ತಿಗೆ ಸರಿಯಾಗಿ ಒಂದು ಕುದುರೆ ಅಲ್ಲಿಗೆ ಓಡಿ ಬಂತು. ಅದರ ಕೇಸರ ಒಂದು ಕಡೆ ಬೆಳ್ಳಿ, ಇನ್ನೊಂದು ಕಡೆ ಬಂಗಾರ!





ಅದರ ಗೊರಸು ಬಡಿದಾಗ ಭೂಮಿ ನಡುಗುತ್ತೆ. ಅದರ ಮೂಗಿನ ಹೊಳ್ಳೆಗಳಿಂದ ಹೊಗೆ ಬರುತ್ತೆ. ಅದರ ಕಿವಿಗಳಿಂದ ಉರಿ ಬರುತ್ತೆ.

ಆ ಕುದುರೆ ಗೋಧಿಯ ತೆನೆಗಳನ್ನು ತಿನ್ನುವುದಕ್ಕೆ ಶುರು ಮಾಡಿತು. ಇಷ್ಟು ತಿಂದರೆ ಅಷ್ಟು ತುಳಿದು ಹಾಕಿತು.

ಇವಾನ್ ಮೆಲ್ಲಗೆ ಕುದುರೆಯ ಹತ್ತಿರ ಹೋಗಿ ಅದರ ಕೊರಳಿಗೆ ಕುಣಿಕೆ ಬೀಳುವಂತೆ ಹಗ್ಗ ಎಸೆದ.

ಕುದುರೆ ಜಗ್ಗಿ ಬಿಡಿಸಿಕೊಳ್ಳಲು ಯತ್ನಿಸಿತು. ಆದರೆ ಇವಾನ್ ತಕ್ಷಣವೇ ಅದರ ಬೆನ್ನಿನ ಮೇಲೆ ನೆಗೆದು ಕುಳಿತು ಅದರ ಕೇಸರವನ್ನು ಭದ್ರವಾಗಿ ಹಿಡಿದುಕೊಂಡ. ಕುದುರೆ ಹೇಗೆ ಕುಣಿದಾಡಿತು! ಹೊಲದಲ್ಲೆಲ್ಲ ಹೇಗೆ ಓಡಾಡಿತು! ಆದರೆ ಇವಾನನನ್ನು ಕೆಡವಲು ಅದರ ಕೈಲಾಗಲಿಲ್ಲ.

ಕುದುರೆ ನಿಂತು ಇವಾನನನ್ನು ಕೇಳಿಕೊಳ್ಳುತ್ತೆ:

"ನನ್ನನ್ನು ಬಿಟ್ಟುಬಿಡು, ಇವಾನ್! ಕಷ್ಟ ಕಾಲದಲ್ಲಿ ನಿನಗೆ ಸಹಾಯ ಮಾಡ್ತೀನಿ."

"ಒಳ್ಳೇದು. ಈಗೇನೋ ಬಿಟ್ಟುಬಿಡುತ್ತೇನೆ. ಆದರೆ ಮತ್ತೆ ನಿನ್ನನ್ನು ಕಾಣೋದು ಹೇಗೆ?" ಇವಾನ್ ಕೇಳಿದ.

"ಒಂದು ಬಯಲಿನ ಮಧ್ಯಭಾಗಕ್ಕೆ ಬಂದು ಮೂರು ಸಾರಿ ಗಟ್ಟಿಯಾಗಿ ಸಿಳ್ಳು ಹಾಕಿ, 'ಬೂದು ಕುದುರೆ!

ಕಿನ್ನರ ಕುದುರೆ! ನನ್ನ ಮುಂದೆ ಬಂದು ನಿಲ್ಲು, ಬಿರುಗಾಳಿಯ ಹಾಗೆ ಬಂದು ನಿಲ್ಲು!' ಅಂತ ಕೂಗಿ ಹೇಳು. ನಾನು ತಕ್ಷಣ ಬರ್ತೀನಿ."

"ಇವಾನ್ ಕುದುರೆಯನ್ನು ಬಿಟ್ಟುಕೊಟ್ಟ. ತಾನು ಇನ್ನೆಂದಿಗೂ ಅವರ ಹೊಲದ ಗೋಧಿಯನ್ನು ತಿನ್ನುವುದಿಲ್ಲವೆಂದೂ ತುಳಿಯುವುದಿಲ್ಲವೆಂದೂ ಅದು ಮಾತು ಕೊಟ್ಟಿತು.

ಬೆಳಿಗ್ಗೆ ಇವಾನ್ ಮನೆಗೆ ಹೋದ.

"ಏನಪ್ಪ, ಏನು ಕಂಡೆ ಹೊಲದಲ್ಲಿ?" ಅಣ್ಣಂದಿರು ಕೇಳುತ್ತಾರೆ.

"ಒಂದು ಕುದುರೇನ ಹಿಡಿದೆ. ಅದರ ಕೇಸರ ಹೇಗಿದೆ ಅಂತ – ಒಂದು ಕಡೆ ಬೆಳ್ಳಿ, ಇನ್ನೊಂದು ಕಡೆ ಬಂಗಾರ."

"ಎಲ್ಲಿ, ಎಲ್ಲಿ ಅದು?"

"ಇನ್ನು ಮುಂದೆ ಗೋಧಿ ತಿನ್ನೋದಿಲ್ಲ ಅಂತ ಮಾತು ಕೊಟ್ಟಿತು. ನಾನು ಬಿಟ್ಟುಬಿಟ್ಟೆ."

ಅಣ್ಣಂದಿರು ಅವನ ಮಾತು ನಂಬಲಿಲ್ಲ, ಪಕ್ಕೆ ಬಿರಿಯೋ ಹಾಗೆ ನಕ್ಕರು. ಆದರೆ ಆ ರಾತ್ರಿಯಿಂದ ಯಾರೂ ಹೊಲದ ಗೋಧಿಯನ್ನು ತಿನ್ನಲೂ ಇಲ್ಲ, ತುಳಿಯಲೂ ಇಲ್ಲ....

ಇದಾದ ಸ್ವಲ್ಪ ಸಮಯದಲ್ಲೇ ಆ ದೇಶದ ದೊರೆ ಎಲ್ಲ ಊರು ಕೇರಿ, ಎಲ್ಲ ಹಳ್ಳಿ ದಿಳ್ಳಿಗೂ ತನ್ನ ದೂತರನ್ನು ಕಳುಹಿಸಿ ಡಂಗುರ ಹೊಡೆಸಿದ:



"ಬನ್ನಿ, ಎಲ್ಲಾ ಬನ್ನಿ! ಶ್ರೀಮಂತರೆ, ವರ್ತಕರೆ, ಸಾಮಾನ್ಯ ರೈತರೇ, ಎಲ್ಲ ಅರಮನೆಗೆ ಬನ್ನಿ! ದೊರೆ ಮಗಳು ಚೆಲುವೆ ಎಲೇನಾಳನ್ನು ನೋಡೋದಕ್ಕೆ ಬನ್ನಿ. ಸುರಸುಂದರಿ ಎಲೇನಾ ಗೋಪುರದ ಮೇಲಂತಸ್ತಿನ ಕಿಟಕಿಯ ಬಳಿ ಕೂತಿದ್ದಾಳೆ. ಯಾರು ಅಲ್ಲಿಯ ತನಕ ಕುದುರೆಯ ಮೇಲೆ ಹಾರಿ ಹೋಗಿ ಅವಳ ಬೆರಳಲ್ಲಿರೋ ವಜ್ರದ ಉಂಗುರವನ್ನು ತಗೋತಾರೋ ಅವರನ್ನು ಅವಳು ಮದುವೆಯಾಗ್ತಾಳೆ!"



ಗೊತ್ತಾದ ದಿನ ದೊರೆಯ ಅರಮನೆಗೆ ಹೋಗುವುದಕ್ಕೆ ಅಣ್ಣಂದಿರಿಬ್ಬರೂ ಸಿದ್ಧರಾಗುತ್ತಾರೆ – ತಾವೇ ರಾಜಕುಮಾರಿಯ ಕೈ ಹಿಡಿಯಲು ಪ್ರಯತ್ನಿಸಲೆಂದಲ್ಲ, ಆದರೆ ಪ್ರಯತ್ನಿಸುವವರನ್ನು ನೋಡಲೆಂದು. ಪೆದ್ದ ಇವಾನ್ ಅವರನ್ನು ಕೇಳಿಕೊಳ್ಳುತ್ತಾನೆ:

"ಅಣ್ಣಂದಿರೇ, ನನಗೂ ಯಾವುದಾದರೂ ಒಂದು ಕುದುರೆ ಕೊಡಿ. ನಾನೂ ಚೆಲುವೆ ಎಲೇನಾಳನ್ನು ನೋಡೋಕೆ ಬರ್ತೇನೆ !"

"ಓಹ್, ನಿನಗೆ ಯಾಕೋ ಅದೆಲ್ಲ, ಪೆದ್ದ ! ಜನ ನಿನ್ನನ್ನು ನೋಡಿ ನಗಬೇಕೂಂತಲೇ? ಒಲೆ ಬಳಿ ಕೂತು ಬೂದಿ ತೆಗೆದು ಹಾಕು, ಸಾಕು !"

ಅಣ್ಣಂದಿರು ಹೊರಟರು. ಇವಾನ್ ತನ್ನ ಅತ್ತಿಗೆಯರನ್ನು ಕೇಳುತ್ತಾನೆ:

"ನನಗೊಂದು ಬುಟ್ಟಿ ಕೊಡಿ. ಕಾಡಿಗೆ ಹೋಗಿ ಅಣಬೆ ಆರಿಸಿಕೊಂಡು ಬರ್ತೇನೆ."

ಅವನು ಬುಟ್ಟಿ ತೆಗೆದುಕೊಂಡು ಹೊರಟ – ಅಣಬೆ ಆರಿಸಿಕೊಂಡು ಬರಲೋ ಅನ್ನುವಂತೆ.

ಬಯಲಿಗೆ ಬಂದು ಬುಟ್ಟಿಯನ್ನು ಒಂದು ಪೊದೆಯ ಕೆಳಗೆಸೆದು, ಗಟ್ಟಿಯಾಗಿ ಮೂರು ಸಾರಿ ಸಿಳ್ಳು ಹಾಕಿ, ಕೂಗಿ ಕರೆದ:

"ಬೂದು ಕುದುರೆ, ಕಿನ್ನರ ಕುದುರೆ, ನನ್ನ ಮುಂದೆ ಬಂದು ನಿಲ್ಲು, ಬಿರುಗಾಳಿಯ ಹಾಗೆ ಬಂದು ನಿಲ್ಲು !"

ಕುದುರೆ ಬರುತ್ತೆ, ಭೂಮಿ ನಡುಗುತ್ತೆ. ಕುದುರೆಯ ಮೂಗಿನ ಹೊಳ್ಳೆಗಳಿಂದ ಹೊಗೆ ಬರುತ್ತೆ, ಅದರ ಕಿವಿಗಳಿಂದ ಉರಿ ಬರುತ್ತೆ. ಅದು ಸರಿಯಾಗಿ ಇವಾನನ ಮುಂದೆ ಬಂದು ನಿಲ್ಲುತ್ತೆ.

"ಏನು ಬೇಕು ನಿನಗೆ?"

ಹೀಗೆ, ಹೀಗೆ, ಅಂತ ಇವಾನ್ ಎಲ್ಲ ಹೇಳ್ತಾನೆ.

"ಸರಿ, ಹಾಗಾದರೆ. ನನ್ನ ಬಲ ಕಿವಿಯ ಒಳಹೊಕ್ಕು ಎಡ ಕಿವಿಯಿಂದ ಹೊರಗೆ ಬಾ !"

ಇವಾನನು ಕುದುರೆಯ ಬಲ ಕಿವಿಯ ಒಳಹೊಕ್ಕು ಎಡಕಿವಿಯಿಂದ ಹೊರಗೆ ಬಂದ. ಅವನು ಎಂಥ ಸುಂದರ ಯುವಕನಾಗಿ ಬದಲಾದನೆಂದರೆ, ಅಂಥವನನ್ನು ಹಿಂದೆಂದೂ ಯಾರೂ ಕಂಡೂ ಇರಲಿಲ್ಲ, ಕೇಳಿಯೂ ಇರಲಿಲ್ಲ !



ಅವನು ಬೂದು ಕುದುರೆ ಮೇಲೆ ಕುಳಿತು ನೇರವಾಗಿ ಪಟ್ಟಣದ ಕಡೆಗೆ ಹೊರಟ.





ಮಾರ್ಗದಲ್ಲಿ ಅವನು ತನ್ನ ಅಣ್ಣಂದಿರನ್ನು ಕಂಡ. ಅವರ ಪಕ್ಕದಲ್ಲೇ ಅವರನ್ನು ತನ್ನ ಕುದುರೆ ಎಬ್ಬಿಸಿದ ಧೂಳಿನಲ್ಲಿ ಮುಳುಗಿಸಿ ಮುಂದೆ ಹೋದ.

ಇವಾನ್ ನೇರವಾಗಿ ಅರಮನೆಯ ಮುಂದಿನ ಚೌಕಕ್ಕೆ ಹೋದ. ಅಲ್ಲಿ ಆಗಲೇ ಜನ ಕಿಕ್ಕಿರಿದು ನೆರೆದಿದ್ದರು. ಮೇಲೆ ಗೋಪುರದ ಕಿಟಕಿಯ ಬಳಿ ರಾಜಕುಮಾರಿ ಚೆಲುವೆ ಎಲೇನಾ ಕುಳಿತಿದ್ದಾಳೆ. ಅವಳ ಬೆರಳಿನಲ್ಲಿ ವಜ್ರದ ಉಂಗುರ ಥಳಥಳನೆ ಹೊಳೆಯುತ್ತಿದೆ – ಬೆಲೆ ಕಟ್ಟಲು ಸಾಧ್ಯವಿಲ್ಲದಂಥ ಉಂಗುರ ಅದು ! ಇನ್ನು ಅವಳಾ



ದರೋ ಸುಂದರಿಯರಲ್ಲೆಲ್ಲ ಸುಂದರಿ ! ಅವಳ ಕೈ ಹಿಡಿಯಲು ಆಶಿಸಿ ಬಂದವರೆಲ್ಲ ಅವಳನ್ನೇ ಮೈಮರೆತು ನೋಡುತ್ತ ನಿಂತಿದ್ದಾರೆ. ಆದರೆ ಅಷ್ಟು ಎತ್ತರಕ್ಕೆ ಹಾರುವ ಧೈರ್ಯ ಯಾರಿಗೂ ಇಲ್ಲ – ಬಿದ್ದು ಮೂಳೆ ಮುರಿದುಕೊಳ್ಳುವ ಹೆದರಿಕೆ ಅವರಿಗೆ.

ಇವಾನ್ ಹಿಮ್ಮಡಿಗಳಿಂದ ಕುದುರೆಯ ಪಕ್ಕ ತಿವಿದ. ಕುದುರೆ ಘೂಂಕರಿಸಿತು, ಕೆನೆಯಿತು, ಧಟಕ್ಕನೆ





ಮೇಲಕ್ಕೆ ಹಾರಿತು. ಆದರೆ ರಾಜಕುಮಾರಿಯ ಕಿಟಕಿಯಿಂದ ಮೂರು ದಿಮ್ಮಿಗಳ ಕೆಳಗಿರುವಷ್ಟು ಎತ್ತರಕ್ಕಷ್ಟೆ ಹಾರಿತು.



ಜನ ಬೆಕ್ಕಸ ಬೆರಗಾಗಿ ನೋಡಿದರು. ಇವಾನ್ ಆಮೇಲೆ ಕುದುರೆಯನ್ನು ಪಕ್ಕಕ್ಕೆ ತಿರುಗಿಸಿಕೊಂಡು ವಾಗಾಲೋಟದಿಂದ ಹೊರಟು ಹೋದ.



“ಯಾರದು ? ಯಾರದು ?” ಎಲ್ಲರೂ ಕೇಳೋದೇ.

ಆದರೆ ಇವಾನ್ ಆಗಲೇ ಕಣ್ಮರೆಯಾಗಿದ್ದ. ಎಲ್ಲಿಂದ ಬಂದ ಅನ್ನೋದನ್ನು ಎಲ್ಲರೂ ಕಂಡಿದ್ದರು. ಆದರೆ ಎಲ್ಲಿಗೆ ಹೋದ ಅನ್ನೋದನ್ನು ಯಾರೂ ಕಾಣಲಿಲ್ಲ.

ಇವಾನ್ ಪಟ್ಟಣದಿಂದ ಹೊರ ಬಂದವನೇ ಬಯಲಿಗೆ ಹೋದ. ಅಲ್ಲಿ ಕುದುರೆಯಿಂದಿಳಿದು, ಅದರ



ಎಡ ಕಿವಿಯ ಒಳಹೊಕ್ಕು ಬಲ ಕಿವಿಯಿಂದ ಹೊರಗೆ ಬಂದ – ಮೊದಲಿನಂತೆ ಪೆದ್ದ ಇವಾನ್ ಆದ. ಬೂದು ಕುದುರೆಯನ್ನು ಬಿಟ್ಟುಕೊಟ್ಟು ತನ್ನ ಮನೆಯ ಕಡೆ ನಡೆದ. ಅಲ್ಲಿ ಒಲೆಯ ಮುಂದೆ, ತನ್ನ ಅಣ್ಣಂದಿರು ಬರುವುದಕ್ಕಾಗಿಯೇ ಕಾದು ಕುಳಿತ.

ಅಣ್ಣಂದಿರು ಮನೆಗೆ ಬರುತ್ತಾರೆ, ತಮ್ಮ ಪತ್ನಿಯರಿಗೆ ತಾವು ಪಟ್ಟಣದಲ್ಲಿ ಕಂಡದ್ದನ್ನೆಲ್ಲ ಹೇಳುತ್ತಾರೆ:

"ಏನೊಂತೀರಿ ! ದೊರೆಯ ಬಳಿಗೆ ಎಂಥ ಸೊಗಸಾದ ಯುವಕ ಬಂದಿದ್ದ ಅಂತೀರಿ ! ಅಂಥವನನ್ನು ನಾವು ಎಂದೂ ಕಂಡುದಿಲ್ಲ. ಹ್ಯಾಗೆ ಹಾರಿದ ! ರಾಜಕುಮಾರಿಯನ್ನು ತಲುಪುವುದಕ್ಕೆ ಮೂರು ದಿಮ್ಮಿಗಳ ಎತ್ತರವಷ್ಟೆ ಸಾಲದೆ ಹೋಯಿತು !"

ಇವಾನ್ ಒಲೆ ಮುಂದೆ ಕುಳಿತು ನಗುತ್ತಾನೆ:

"ಏನಂದಿರಿ – ಸೊಗಸಾದ ಯುವಕನೇ ? ಬಹುಶಃ ನಾನೇ ಅಲ್ಲಿಗೆ ಬಂದಿದ್ದೆನೇನೋ ?"

"ನೀನೊಬ್ಬ ಪೆದ್ದ. ನೀನು ಅಲ್ಲಿಗೆ ಹೇಗೆ ಬರ್ತೀಯೋ ? ನೀನು ಇಲ್ಲೇ ಕೂತುಕೊಂಡು ನೊಣ ಹಿಡಿಯೋಕೆ ಸರಿ !.."

ಮಾರನೆಯ ದಿನವೂ ಇಬ್ಬರು ಅಣ್ಣಂದಿರೂ ಮತ್ತೆ ಪಟ್ಟಣಕ್ಕೆ ಹೊರಟರು. ಇವಾನ್ ಬುಟ್ಟಿ ತೆಗೆದುಕೊಂಡು ಅಣಬೆ ತರೋದಕ್ಕೆ ಹೋದ.

ಬಯಲಿಗೆ ಬಂದಾಗ ಅವನು ಬುಟ್ಟಿಯನ್ನು ಒಂದು ಪೊದೆಯ ಕೆಳಗೆಸೆದು, ಗಟ್ಟಿಯಾಗಿ ಮೂರು ಸಾರಿ ಸಿಳ್ಳು ಹಾಕಿ, ಕೂಗಿ ಕರೆದ:

"ಬೂದು ಕುದುರೆ, ಕಿನ್ನರ ಕುದುರೆ, ನನ್ನ ಮುಂದೆ ಬಂದು ನಿಲ್ಲು, ಬಿರುಗಾಳಿಯ ಹಾಗೆ ಬಂದು ನಿಲ್ಲು !"

ಕುದುರೆ ಬರುತ್ತೆ, ಭೂಮಿ ನಡುಗುತ್ತೆ, ಕುದುರೆಯ ಮೂಗಿನ ಹೊಳ್ಳೆಗಳಿಂದ ಹೊಗೆ ಬರುತ್ತೆ, ಅದರ ಕಿವಿಗಳಿಂದ ಉರಿ ಬರುತ್ತೆ. ಅದು ಸರಿಯಾಗಿ ಇವಾನನ ಮುಂದೆ ಬಂದು ನಿಲ್ಲುತ್ತೆ.

ಇವಾನ್ ಅದರ ಬಲ ಕಿವಿಯ ಒಳಹೊಕ್ಕು ಎಡ ಕಿವಿಯಿಂದ ಹೊರಗೆ ಬರುತ್ತಾನೆ – ಸೊಗಸಾದ ಯುವಕನಾಗಿ ಬದಲಾಗುತ್ತಾನೆ. ಕುದುರೆ ಹತ್ತಿ ಅರಮನೆಯ ಕಡೆಗೆ ನಾಗಾಲೋಟದಿಂದ ಹೋಗುತ್ತಾನೆ.

ನೋಡುತ್ತಾನೆ – ಚೌಕದಲ್ಲಿ ಹಿಂದಿನ ದಿನಕ್ಕಿಂತ ಹೆಚ್ಚಿಗೆ ಜನ ಸೇರಿದ್ದಾರೆ. ಎಲ್ಲರೂ ಸುರಸುಂದರ ರಾಜಕುಮಾರಿಯ ಕಡೆಗೇ ನೋಡುತ್ತ ನಿಂತಿದ್ದಾರೆ. ಆದರೆ ಅಷ್ಟು ಎತ್ತರಕ್ಕೆ ಹಾರುವ ಧೈರ್ಯ ಯಾರಿಗೂ ಇಲ್ಲ – ಬಿದ್ದು ಮೂಳೆ ಮುರಿದುಕೊಳ್ಳುವ ಹೆದರಿಕೆ ಅವರಿಗೆ.

ಇವಾನ್ ಹಿಮ್ಮಡಿಗಳಿಂದ ಕುದುರೆಯ ಪಕ್ಕ ತಿವಿದ. ಕುದುರೆ ಘೂಂಕರಿಸಿತು, ಕೆನೆಯಿತು, ಥಟಕ್ಕನೆ ಮೇಲಕ್ಕೆ ಹಾರಿತು. ಆದರೆ ರಾಜಕುಮಾರಿಯ ಕಿಟಕಿಯಿಂದ ಎರಡು ದಿಮ್ಮಿಗಳ ಕೆಳಗಿರುವಷ್ಟು ಎತ್ತರಕ್ಕಷ್ಟೆ ಹಾರಿತು.

ಇವಾನ್ ಕುದುರೆಯನ್ನು ಪಕ್ಕಕ್ಕೆ ತಿರುಗಿಸಿಕೊಂಡು ನಾಗಾಲೋಟದಿಂದ ಹೊರಟುಹೋದ. ಅವನು ಎಲ್ಲಿಂದ ಬಂದ ಅನ್ನೋದನ್ನು ಎಲ್ಲರೂ ಕಂಡಿದ್ದರು. ಆದರೆ ಎಲ್ಲಿಗೆ ಹೋದ ಅನ್ನೋದನ್ನು ಯಾರೂ ಕಾಣಲಿಲ್ಲ.



ಇವಾನ್ ಆಗಲೇ ಬಯಲಿಗೆ ಬಂದಿದ್ದ. ಬೂದು ಕುದುರೆಯನ್ನು ಬಿಟ್ಟುಕೊಟ್ಟು, ಕಾಡಿನಲ್ಲಿ ಬುಟ್ಟಿ ತುಂಬ ಕೈಗೆ ಸಿಕ್ಕಿದ ಅಣಬೆಗಳನ್ನು ತುಂಬಿಕೊಂಡು ಮನೆಗೆ ಹೋದ. ಅತ್ತಿಗೆಯವರು ಕೋಪದಿಂದ ಬೈದರು:

"ಪೆದ್ದ ! ಎಂಥ ಅಣಬೆ ತಂದಿದೀಯಲ್ಲೋ ! ಇದನ್ನು ನೀನೇ ತಿನ್ನಬೇಕಷ್ಟೆ. ನಾವು ಯಾರೂ ತಿನ್ನೊಲ್ಲ !"
ಇವಾನ್ ನಸುನಗುತ್ತಾನೆ, ಒಲೆಯ ಬಳಿ ಕುಳಿತುಕೊಳ್ಳುತ್ತಾನೆ.
ಅವನ ಅಣ್ಣಂದಿರು ಪಟ್ಟಣದಿಂದ ಬರುತ್ತಾರೆ, ತಮ್ಮ ಪತ್ನಿಯರಿಗೆ ಹೇಳುತ್ತಾರೆ:



"ಇವತ್ತೂ ಅದೇ ಯುವಕ ಬಂದಿದ್ದ ಕಣ್ರೀ! ರಾಜಕುಮಾರಿಯ ಕಿಟಕಿಯಿಂದ ಎರಡು ದಿಮ್ಮಿಗಳ ಕೆಳಗಿನವರೆಗೂ ಹಾರಿದ."

ಇವಾನ್ ಮತ್ತೆ ಅವರಿಗೆ ಹೇಳುತ್ತಾನೆ :

"ಏನು, ಮತ್ತೆ ಬಂದಿದ್ದನೇ? ಬಹುಶಃ ನಾನೇ ಅಲ್ಲಿಗೆ ಬಂದಿದ್ದೆನೇನೋ!"

"ಕೂತ್ಕೊಳ್ಳೋ, ಮೂರ್ಖ, ಏನೇನೋ ಮಾತಾಡಬೇಡ!.."

ಮೂರನೆಯ ದಿನವೂ ದೊರೆಯ ಭಟರು ಮತ್ತೆ ಡಂಗುರ ಸಾರಿದರು. ಅಣ್ಣಂದಿರು ಪಟ್ಟಣಕ್ಕೆ ಹೊರಡಲು ಸಿದ್ಧರಾದರು. ಅವರನ್ನು ಇವಾನ್ ಕೇಳುತ್ತಾನೆ:

"ಅಣ್ಣಂದಿರಾ, ನನಗೂ ಯಾವುದಾದರೂ ಒಂದು ಮುದಿ ಕುದುರೆ ಕೊಡಿ. ನಾನೂ ನಿಮ್ಮ ಜೊತೆ ಬರ್ತೀನಿ!"

"ಕೂತ್ಕೊಳ್ಳೋ, ಮೂರ್ಖ, ಮನೆಯಲ್ಲೇ! ನೀನೊಬ್ಬ ಅಲ್ಲಿ ಸಾಲದಾಗಿದೆ!" ಹಾಗೆಂದು ಅವರು ಹೊರಟು ಹೋದರು.

ಇವಾನ್ ಬಯಲಿಗೆ ಹೋದ, ಗಟ್ಟಿಯಾಗಿ ಮೂರು ಸಾರಿ ಸಿಳ್ಳು ಹಾಕಿ ಕೂಗಿ ಕರೆದ:

"ಬೂದು ಕುದುರೆ, ಕಿನ್ನರ ಕುದುರೆ, ನನ್ನ ಮುಂದೆ ಬಂದು ನಿಲ್ಲು, ಬಿರುಗಾಳಿಯ ಹಾಗೆ ಬಂದು ನಿಲ್ಲು!"

ಕುದುರೆ ಬರುತ್ತೆ, ಭೂಮಿ ನಡುಗುತ್ತೆ. ಕುದುರೆಯ ಮೂಗಿನಿಂದ ಹೊಗೆ ಬರುತ್ತೆ, ಅದರ ಕಿವಿಗಳಿಂದ ಉರಿ ಬರುತ್ತೆ. ಅದು ಬಂದು ಸರಿಯಾಗಿ ಇವಾನನ ಮುಂದೆ ನಿಲ್ಲುತ್ತೆ.

ಇವಾನ್ ಅದರ ಬಲ ಕಿವಿಯ ಒಳಹೊಕ್ಕು ಎಡ ಕಿವಿಯಿಂದ ಹೊರಗೆ ಬರುತ್ತಾನೆ – ಸೊಗಸಾದ ಯುವಕನಾಗಿ ಬದಲಾಗುತ್ತಾನೆ.

ಕುದುರೆ ಹತ್ತಿ ಅರಮನೆಯ ಕಡೆಗೆ ನಾಗಾಲೋಟದಿಂದ ಹೋಗುತ್ತಾನೆ.

ರಾಜಕುಮಾರಿ ಕುಳಿತಿದ್ದ ಎತ್ತರ ಗೋಪುರದ ಬಳಿ ಬಂದಾಗ ಅವನು ಕುದುರೆಗೆ ಚಾವಟಿಯಿಂದ ಒಂದು ಏಟು ಕೊಟ್ಟ. ಕುದುರೆ ಹಿಂದೆಂದಿಗಿಂತ ಹೆಚ್ಚು ಜೋರಾಗಿ ಘೂಂಕರಿಸಿತು, ನೆಲವನ್ನು ತನ್ನ ಗೊರಸುಗಳಿಂದ ಅಪ್ಪಳಿಸಿತು, ಹಾರಿತು – ಅವನು ರಾಜಕುಮಾರಿಯ ಕಿಟಕಿ ತಲುಪಿದ್ದ!

ಇವಾನ್ ರಾಜಕುಮಾರಿಯ ಕೆಂಗುಲಾಬಿ ತುಟಿಗಳ ಮೇಲೆ ಮುತ್ತಿಟ್ಟ, ಅವಳ ಬೆರಳಿನಿಂದ ಅಮೂಲ್ಯ ವಜ್ರದ ಉಂಗುರವನ್ನು ಬಿಡಿಸಿಕೊಂಡ. ಆಮೇಲೆ ಅವನು ಕುದುರೆಯನ್ನು ತಿರುಗಿಸಿಕೊಂಡು ನಾಗಾಲೋಟದಿಂದ ಹೊರಟುಹೋದ.



ಜನ ಕೂಗಿದರು: "ಹಿಡಿಯಿರಿ ಅವನನ್ನು ! ಹಿಡಿಯಿರಿ !" ಆದರೆ ಇವಾನ್ ಆಗಲೇ ಕಣ್ಮರೆಯಾಗಿದ್ದ. ಅವನು ಕುದುರೆಯನ್ನು ಬಿಟ್ಟುಕೊಟ್ಟು ಮನೆಗೆ ಹೋದ. ಒಂದು ಕೈಗೆ ಬಟ್ಟೆ ಸುತ್ತಿಕೊಂಡಿದ್ದ.

"ಏನಾಯಿತು ನಿನ್ನ ಕೈಗೆ?" ಅವನ ಅತ್ತಿಗೆಯರು ಅವನನ್ನು ಕೇಳುತ್ತಾರೆ.

"ಏನಿಲ್ಲ, ಅಣಬೆ ಆರಿಸುತ್ತಿದ್ದಾಗ ತರಚಿಕೊಂಡೆ..."

ಹಾಗೆಂದು ಅವನು ಒಲೆಗೂಡಿನ ಮೇಲೆ ಹತ್ತಿ ಕುಳಿತ.

ಅಣ್ಣಂದಿರು ಹಿಂದಿರುಗುತ್ತಾರೆ. ತಮ್ಮ ಪತ್ನಿಯರಿಗೆ ಹೇಳುತ್ತಾರೆ:

"ನೋಡಿ, ಈ ಸಾರಿ ಆ ಯುವಕ ರಾಜಕುಮಾರಿಯ ಕಿಟಕಿಯವರೆಗೂ ಹಾರೇ ಬಿಟ್ಟ. ಅವಳಿಗೆ ಮುತ್ತು ಕೊಟ್ಟು ಅವಳ ಬೆರಳಿನಿಂದ ಉಂಗುರವನ್ನು ಕಳಚಿಕೊಂಡು ಹೊರಟೇ ಹೋದ!"

ಇವಾನ್ ಹೊಗೆ ಕೊಳವಿಯ ಹಿಂಬದಿಯಿಂದಲೇ ಹೇಳುತ್ತಾನೆ:

"ಏನು, ಇವತ್ತೂ ಬಂದಿದ್ದನೆ? ಬಹುಶಃ ನಾನೇ ಅಲ್ಲಿಗೆ ಬಂದಿದ್ದೇನೇನೋ!"

"ಕೂತ್ಕೊಳ್ಳೋ, ಪೆದ್ದ. ಎಲ್ಲ ಮಾತಿಗೂ ಮಧ್ಯೆ ಬರಬೇಡ!"

ರಾಜಕುಮಾರಿಯ ಉಂಗುರವನ್ನು ನೋಡಬೇಕೂಂತ ಇವಾನನಿಗೆ ಆಸೆಯಾಯಿತು. ಕೈಗೆ ಸುತ್ತಿದ್ದ ಬಟ್ಟೆ ಬಿಚ್ಚಿದನೋ ಇಲ್ಲವೋ ಇಡೀ ಮನೆ ಬೆಳಕಿನಿಂದ ತುಂಬುತ್ತೆ!

"ಸಾಕು ಮಾಡೋ, ಪೆದ್ದ. ಬೆಂಕಿ ಜತೆ ಆಟವಾಡಬೇಡ!" ಅಣ್ಣಂದಿರು ಗದರಿಸಿ ಹೇಳುತ್ತಾರೆ. "ಮನೇನೇ ಸುಟ್ಟು ಹಾಕ್ತೀಯ. ನಿನ್ನನ್ನು ನಾವು ಆಗಲೇ ಮನೆ ಬಿಟ್ಟು ಓಡಿಸಬೇಕಾಗಿತ್ತು!"

ಇವಾನ್ ಏನೂ ಹೇಳಲಿಲ್ಲ. ಬಟ್ಟೆಯನ್ನು ಮತ್ತೆ ಕೈಗೆ ಸುತ್ತಿಕೊಂಡ.

ಮೂರು ದಿನಗಳಾದ ಮೇಲೆ ದೊರೆ ಡಂಗುರ ಹೊಡೆಸಿದ, ಎಲ್ಲರೂ ಅರಮನೆಗೆ ಊಟಕ್ಕೆ ಬರಬೇಕು,





ಯಾರೂ ಮನೆಯಲ್ಲಿ ಉಳಿದುಕೊಳ್ಳಬಾರದು, ಯಾರಾದರೂ ಬಾರದೇ ಹೋದರೆ ಅವರ ತಲೆಯನ್ನು ಕಡಿದು ಹಾಕಲಾಗುತ್ತೆ, ಅಂತ !

ಏನು ಮಾಡೋಕೂ ಆಗಲಿಲ್ಲ — ಅಣ್ಣಂದಿರು ಪೆದ್ದ ಇವಾನನನ್ನೂ ಅರಮನೆಗೆ ಊಟಕ್ಕೆ ಕರೆದುಕೊಂಡು ಹೋಗಲೇ ಬೇಕಾಯಿತು.

ಅರಮನೆಗೆ ಹೋದಾಗ ಎಲ್ಲ ಜನರನ್ನೂ ಕಸೂತಿ ಹಾಕಿದ ಶುಭ್ರವಾದ ಬಟ್ಟೆ ಹಾಸಿದ್ದ ಓಕ್ ಮರದ ಮೇಜುಗಳ ಮುಂದೆ ಕೂರಿಸಲಾಯಿತು. ಅವರೆಲ್ಲ ಬೇಕಾದಷ್ಟು ತಿಂದರು, ಕುಡಿದರು, ಹರಟೆ ಹೊಡೆದರು.

ಇವಾನ್ ಮಾತ್ರ ಒಲೆ ಹಿಂದೆ ಒಂದು ಮೂಲೆಯಲ್ಲಿ ಹೋಗಿ ಕೂತುಕೊಳ್ಳುತ್ತಾನೆ.

ರಾಜಕುಮಾರಿ ಚೆಲುವೆ ಎಲೇನಾ ಬರುತ್ತಾಳೆ, ಅತಿಥಿಗಳಿಗೆಲ್ಲ ದ್ರಾಕ್ಷಾರಸ ಜೇನು ಕೊಟ್ಟು ಉಪಚರಿಸುತ್ತಾಳೆ. ಒಬ್ಬೊಬ್ಬರ ಮುಂದೂ ನಿಂತು ನೋಡುತ್ತಾಳೆ, ಯಾರ ಬೆರಳಲ್ಲಾದರೂ ತನ್ನ ಉಂಗುರ ಇದೆಯೇ ಅಂತ. ಯಾರ ಬೆರಳಲ್ಲಾದರೂ ಅದು ಇದ್ದರೆ ಅವನೇ ಅವಳ ಪತಿ.

ಅವಳಿಗೆ ತನ್ನ ಉಂಗುರ ಎಲ್ಲೂ ಕಂಡುಬರಲಿಲ್ಲ.



ಎಲ್ಲ ಅತಿಥಿಗಳನ್ನೂ ನೋಡಿದ ಮೇಲೆ ಅವಳು ಇವಾನನ ಬಳಿಗೆ ಬರುತ್ತಾಳೆ. ಅವನು ಹರಕು ಬಟ್ಟೆ ತೊಟ್ಟು ಕೈಗೆ ಚಿಂದಿ ಸುತ್ತಿಕೊಂಡು ಒಲೆಯ ಹಿಂದೆ ಮೂಲೆಯಲ್ಲಿ ಕೂತಿದ್ದಾನೆ.

ಅಣ್ಣಂದಿರು ನೋಡಿ ಅಂದುಕೋತಾರೆ: "ಅಯ್ಯೋ ನೋಡು, ರಾಜಕುಮಾರಿ ನಮ್ಮ ಪೆದ್ದ ಇವಾನನಿಗೂ ದ್ರಾಕ್ಷಾರಸ ಕೊಡುತ್ತಿದ್ದಾಳೆ!"

ರಾಜಕುಮಾರಿ ಇವಾನನ ಬಳಿಗೆ ಒಂದು ಬಟ್ಟಲು ದ್ರಾಕ್ಷಾರಸ ತೆಗೆದುಕೊಂಡು ಹೋಗಿ, ಕೇಳುತ್ತಾಳೆ:

"ನಿನ್ನ ಕೈಗೆ ಏನಾಗಿದೆ? ಯಾಕೆ ಬಟ್ಟೆ ಸುತ್ತಿಕೊಂಡಿದೀಯ?"

"ಕಾಡಿನಲ್ಲಿ ಅಣಬೆ ಆರಿಸುತ್ತಿದ್ದೆ, ತರಚಿಕೊಂಡೆ."

"ಎಲ್ಲಿ, ಬಿಚ್ಚಿ ತೋರಿಸು ನೋಡೋಣ!"

ಇವಾನ್ ಬಿಚ್ಚಿದ. ಅಲ್ಲಿ, ಅವನ ಬೆರಳಿನಲ್ಲಿ, ಇದೆ ಅವಳ ಅಮೂಲ್ಯ ಉಂಗುರ! ಹೇಗೆ ಹೊಳೀತಾ ಇದೆ, ಹೇಗೆ ಥಳಥಳಿಸುತ್ತಿದೆ!

ರಾಜಕುಮಾರಿಗೆ ತುಂಬ ಸಂತೋಷವಾಯಿತು. ಅವನ ಕೈ ಹಿಡಿದು ದೊರೆಯ ಬಳಿಗೆ ಕರೆದುಕೊಂಡು ಹೋಗಿ ಹೇಳುತ್ತಾಳೆ:

"ಇಲ್ಲಿ ನೋಡಿ, ಅಪ್ಪ, ನನ್ನ ಪತಿ !"

ಇವಾನ್ ಮೈ ತೊಳೆದುಕೊಂಡ, ಬಟ್ಟೆ ಬದಲಿಸಿದ. ಅವನು ಇನ್ನೆಷ್ಟು ಮಾತ್ರವೂ ಪೆದ್ದ ಇವಾನ್ ಆಗಿರಲಿಲ್ಲ, ಆದರೆ ಅತ್ಯಂತ ಸೊಗಸಾದ ಯುವಕನಾಗಿದ್ದ.

ಮಾತುಕತೆಗಳಲ್ಲಿ ಒಂದು ನಿಮಿಷವೂ ಹಾಳು ಮಾಡದೆ ಅವರು ತಕ್ಷಣವೇ ಮದುವೆಗೆ ಏರ್ಪಾಟು ಮಾಡಿದರು. ಎಲ್ಲರಿಗೂ ಅದ್ದೂರಿಯ ಔತಣ.

ನಾನೂ ಅಲ್ಲಿದ್ದೆ, ಬೇಕಾದಷ್ಟು ಜೇನು ದ್ರಾಕ್ಷಾರಸ ಕುಡಿದೆ, ನನ್ನ ಆನಂದಕ್ಕೆ ಪಾರವೇ ಇರಲಿಲ್ಲ.



